| | |
|---|---|
| ಸೂ. 11 **100. ಅಲ್‌ಆದಿಯಾತ್** ರು. 1 | سُورَةُ الْعٰدِيٰتِ مَكِّيَّةٌ |

(ಅವತೀರ್ಣ - ಮಕ್ಕಾದಲ್ಲಿ)

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسۡمِ اللّٰهِ الرَّحۡمٰنِ الرَّحِيۡمِ ○ |
| 1. ಬುಸುಗುಡುತ್ತ ಓಡುವವುಗಳ (ಕುದುರೆಗಳ) ಆಣೆ- | وَالۡعٰدِيٰتِ ضَبۡحًا ۙ﴿۱﴾ |
| 2. ಅವು (ತಮ್ಮ ಗೊರಸುಗಳಿಂದ) ಕಿಡಿಗಳನ್ನು ಹಾರಿಸುತ್ತವೆ- | فَالۡمُوۡرِيٰتِ قَدۡحًا ۙ﴿۲﴾ |
| 3. ಅನಂತರ ಪ್ರಾತಃಕಾಲದಲ್ಲಿ ಆಕ್ರಮಣ ನಡೆಸುತ್ತವೆ- | فَالۡمُغِيۡرٰتِ صُبۡحًا ۙ﴿۳﴾ |
| 4. ಆಗ ಅವು ಧೂಳೆಬ್ಬಿಸುತ್ತವೆ- | فَاَثَرۡنَ بِهٖ نَقۡعًا ۙ﴿۴﴾ |
| 5. ತರುವಾಯ ಇದೇ ಸ್ಥಿತಿಯಲ್ಲಿ ಯಾವುದಾದರೂ ಜನ ಸಮೂಹ ದೊಳಕ್ಕೆ ನುಗ್ಗಿ ಬಿಡುತ್ತವೆ- | فَوَسَطۡنَ بِهٖ جَمۡعًا ۙ﴿۵﴾ |
| 6. ವಾಸ್ತವದಲ್ಲಿ ಮಾನವನು ತನ್ನ ಪ್ರಭುವಿಗೆ ಬಹಳ ಕೃತಘ್ನ ನಾಗಿದ್ದಾನೆ.[1] | اِنَّ الۡاِنۡسَانَ لِرَبِّهٖ لَـكَنُوۡدٌ ۚ﴿۶﴾ |
| 7. ಮತ್ತು ಇದಕ್ಕೆ ಸ್ವತಃ ಅವನೇ ಸಾಕ್ಷಿಯಾಗಿದ್ದಾನೆ.[2] | وَاِنَّهٗ عَلٰى ذٰلِكَ لَشَهِيۡدٌ ۚ﴿۷﴾ |
| 8. ಅವನು ಧನ ಕನಕಗಳ ಅತಿಯಾದ ಮೋಹದಲ್ಲಿ ಸಿಲುಕಿ ಕೊಂಡಿದ್ದಾನೆ. | وَاِنَّهٗ لِحُبِّ الۡخَيۡرِ لَشَدِيۡدٌ ؕ﴿۸﴾ |

1. ಅರ್ಥಾತ್- ಅಲ್ಲಾಹನು ಅವರಿಗೆ ದಯಪಾಲಿಸಿರುವ ಶಕ್ತಿ-ಸಾಮರ್ಥ್ಯಗಳನ್ನು ಶೋಷಣೆ ಮತ್ತು ದಬ್ಬಾಳಿಕೆಗಾಗಿ ಉಪಯೋಗಿಸುತ್ತಾನೆ.
2. ಅರ್ಥಾತ್- ಅವನ ಆತ್ಮಸಾಕ್ಷಿಯೇ ಇದಕ್ಕೆ ಸಾಕ್ಷಿ, ಅವನ ಕರ್ಮಗಳು ಇದಕ್ಕೆ ಸಾಕ್ಷಿ. ಅಲ್ಲದೆ ಸತ್ಯನಿಷೇಧಿಗಳಾದ ಅನೇಕ ವ್ಯಕ್ತಿಗಳು ನಾಲಗೆಯಿಂದಲೂ ತಮ್ಮ ಕೃತಘ್ನತೆಯನ್ನು ವ್ಯಕ್ತಪಡಿಸುತ್ತಾರೆ.

9-10. ಸಮಾಧಿಗಳೊಳಗೆ (ದಫನವಾಗಿ) ಇರುವ ಸಕಲವನ್ನೂ ಹೊರ ತೆಗೆಯಲಾಗುವ ಮತ್ತು ಹೃದಯಗಳೊಳಗೆ (ಅಡಗಿ) ಇರುವ ಎಲ್ಲವನ್ನೂ ಹೊರತೆಗೆದು ವಿಚಾರಣೆಗೊಳ ಪಡಿಸಲಾಗುವ ಆ ಸಂದರ್ಭವನ್ನು ಅವನು ಅರಿತಿಲ್ಲವೇ?[3]

أَفَلَا يَعْلَمُ إِذَا بُعْثِرَ مَا فِي الْقُبُورِ ⑨ وَحُصِّلَ مَا فِي الصُّدُورِ ⑩

11. ಖಂಡಿತವಾಗಿಯೂ ಅಂದು ಅವರ ಪ್ರಭು ಅವರನ್ನು ಪೂರ್ಣವಾಗಿ ತಿಳಿದವನಾಗಿರುವನು.[4]

إِنَّ رَبَّهُم بِهِمْ يَوْمَئِذٍ لَّخَبِيرٌ ⑪

---

3. ಅರ್ಥಾತ್- ಮನಸ್ಸಿನಲ್ಲಡಗಿದ್ದ ಇರಾದೆ ಮತ್ತು ಉದ್ದೇಶಗಳನ್ನೆಲ್ಲಾ ಬಹಿರಂಗಗೊಳಿಸಲಾಗುವುದು. ಅದರ ಬಗ್ಗೆ ಪರಿಶೋಧನೆ ನಡೆಸಿ ಒಳ್ಳೆಯದು ಮತ್ತು ಕೆಟ್ಟದ್ದನ್ನು ಆರಿಸಿ ಪ್ರತ್ಯೇಕ ಗೊಳಿಸಲಾಗುವುದು.
4. ಅರ್ಥಾತ್- ಯಾರು ಹೇಗಿದ್ದಾರೆ ಮತ್ತು ಯಾವ ಶಿಕ್ಷೆ ಅಥವಾ ಪ್ರತಿಫಲಕ್ಕೆ ಅರ್ಹರಾಗಿದ್ದಾರೆ ಎಂದು ಅವನಿಗೆ ಚೆನ್ನಾಗಿ ತಿಳಿದಿದೆ.